# ಪಂಚಮ

ಸಂಪುಟ : 4 ಸಂಚಿಕೆ : 11-12, 5, ಆಗಸ್ಟ್ 1980 ಪಾಕ್ಷಿಕ ಬೆಲೆ : 20 ಪೈಸೆ



## ಅತ್ಯಾಚಾರ: ನಾಗಮ್ಮನಿಗೆ ನ್ಯಾಯ ಸಿಕ್ಕೀತೆ?

ವರದಿ : ಎಸ್‌ಗ

ದಿನಬೆಳಗಾದರೆ ಪತ್ರಿಕೆಗಳ ತುಂಬ ಒಂದಿಲ್ಲ ಒಂದು ಕಡೆ ಮಹಿಳೆಯರ ಮೇಲಿನ ಅತ್ಯಾಚಾರಗಳ ಸುದ್ದಿ. ಮಹಿಳೆಯೊಬ್ಬರು ಪ್ರಧಾನಿಯಾಗಿರುವ ಸಂದರ್ಭದಲ್ಲಿ ದೇಶಾದ್ಯಂತ ಅವ್ಯಾಹತವಾಗಿ ಮಹಿಳೆಯರ ಮೇಲೆ ನಡೆಯುತ್ತಿರುವ ಅತ್ಯಾಚಾರಗಳು ಒಂದು ವಿಪರ್ಯಾಸ. ದೇಶದಲ್ಲೆಲ್ಲ 'ಅತ್ಯಾಚಾರ ಸಪ್ತಾಹ' ನಡೆಯುತ್ತಿದೆಯೇನೋ ಎಂದು ಯಾರಿಗೂ ಅನ್ನಿಸದಿರಲಾರದು.

ಇಂತಹ ಅಮಾನುಷ ಘಟನೆಗಳಿಗೆ ಕರ್ನಾಟಕದ ಕೋಲಾರ ಜಿಲ್ಲೆಯು ಹೇಳಿಮಾಡಿಸಿದಂತಹ ಜಿಲ್ಲೆ. ಹುಣಸೀಕೋಟೆಯ ಅನಸೂಯಮ್ಮನ ಮೇಲಿನ ಅತ್ಯಾಚಾರ, ಬಾಗೇಪಲ್ಲಿ ತಾಲ್ಲೂಕಿನ ಚರುಲೋಪಲ್ಲಿ ಗ್ರಾಮದ ಸಂಜೀವಮ್ಮಳನ್ನು ಹಾಡುಹಗಲಲ್ಲೇ ಲೈಟುಕಂಬಕ್ಕೆ ಕಟ್ಟಿಹಾಕಿ ಕಲ್ಲು, ಪೊರಕೆಗಳಿಂದ ಹೊಡೆದು ಹಿಂಸಿಸಿದಂತಹ ಘಟನೆಗಳು ಇನ್ನೂ ಹಚ್ಚಹಸುರಾಗೇ ಇರುವಾಗಲೇ ಚಿಂತಾಮಣಿಯ ನಲ್ಲಗುಟ್ಟಹಳ್ಳಿ ಗ್ರಾಮದ ಹದಿನಾರರ ಹರೆಯದ ಮುಗ್ಧ ಮಹಿಳೆ ನಾಗಮ್ಮನ ಮೇಲೆ ನಡದ ಅತ್ಯಾಚಾರ ಘಟನೆಯು ದಲಿತ ಹೆಣ್ಣುಮಕ್ಕಳ ಭವಿಷ್ಯವನ್ನೇ ಕಳವಳಕ್ಕೀಡುಮಾಡಿದೆ.

ಚಿಂತಾಮಣಿಯ ನಾಗಮ್ಮ ಅತ್ಯಾಚಾರಕ್ಕೆ ಬಲಿಯಾಗುವ ಒಂದು ತಿಂಗಳ ಹಿಂದೆತಾನೆ ಅದೇ ತಾಲ್ಲೂಕಿನ ನಲ್ಲಗುಟ್ಟಹಳ್ಳಿಯ ನಾರಾಯಣಸ್ವಾಮಿ ಎಂಬ ಚಿಗುರುಮೀಸೆ ಯುವಕನಿಂದ ತಾಳಿಕಟ್ಟಿಸಿಕೊಂಡಳು. ಜೂನ್ '30ರಂದು ನಾಗಮ್ಮನ ಬದುಕಿನಲ್ಲಿ ಒಂದು ಕರಾಳದಿನ.

(2ನೇ ಪುಟ ನೋಡಿ)



ಬಾಗಪತ್ ದುರಂತ ಮಹಿಳೆ ಮಾಯಾತ್ಯಾಗಿ (ವರದಿ ಮಧ್ಯದ ಪುಟ)

## ೧೫ರಂದು 'ಕರಾಳ ದಿನ' ಆಚರಣೆ

ಇಂಡಿಯಾ ತನ್ನ ಮೂವತ್ಮೂರನೇ ವರ್ಷದ 'ಸ್ವಾತಂತ್ರ್ಯ'ಕ್ಕೆ ಕಾಲಿಡುತ್ತಿದೆ. ಆದರೆ ಈ ದೇಶದ ಸ್ವಾತಂತ್ರ್ಯ ಇನ್ನೂ ನಿಜವಾದ ಅರ್ಥವನ್ನು ಕಂಡುಕೊಂಡಿಲ್ಲ ಒಂದು ಬಗೆಯಲ್ಲಿ ಅದಕ್ಕೆ ಗರಬಡಿದೆ. ಸುಮಾರು 65 ಕೋಟಿಗೂ ಹೆಚ್ಚು ಜನರಿರುವ ಇಲ್ಲಿ 40 ಕೋಟಿಗೂ ಹೆಚ್ಚು ಜನರು ಹೊಟ್ಟೆ, ಬಟ್ಟೆಗಿಲ್ಲದೆ ಮಲಗಲು ಮನೆಗಳಿಲ್ಲದೆ ಕಡುಬಡತನದಲ್ಲಿದ್ದಾರೆ.

ಈ ದಲಿತವರ್ಗದ ಜನ ಈ ದೇಶದ ಎಲ್ಲ ಸಂಪತ್ತನ್ನು ಉತ್ಪಾದಿಸುವ ಕೆಲಸಗಳಲ್ಲಿ ತೊಡಗಿರುವವರೇ ಆಗಿದ್ದಾರೆ. ಆದರೂ ಆ ಸಂಪತ್ತು ಅವರ ಪಾಲಿಗಿಲ್ಲ. ಬದಲಾಗಿ ದುಡಿಯುವ ಈ ಜನರೇ ಅಪಾರ ಹಸಿವು-ಅಸ್ಪೃಶ್ಯತೆಯಿಂದ. ನರಳಿಕೊರಳಿ ಸಾಯುತ್ತಿರುವರು. ಇಷ್ಟಾದರೂ ಈ ವರ್ಗಗಳ ಮೇಲೆ ನಿರಂತರ ಕೊಲೆ-ಸುಲಿಗೆಗಳು, ಮಹಿಳೆಯರ ಮೇಲಿನ ಅಮಾನುಷ ಅತ್ಯಾಚಾರಗಳು ಎಡಬಿಡದೆ ನಡೆಯುತ್ತಿವೆ.

ಈ ಎಲ್ಲ ಶೋಷಣೆ, ದಬ್ಬಾಳಿಕೆ ತಡೆಗಟ್ಟದ, ದಲಿತರ ಹಕ್ಕನ್ನು ರಕ್ಷಿಸದ, ಎಲ್ಲ ಜನತೆಗೂ ಸಮಾನತೆ ಆಧಾರದ ಮೇಲೆ ಅನ್ನ, ವಸತಿ, ಭೂಮಿ, ವಿದ್ಯೆ, ಉದ್ಯೋಗ ನೀಡದ ಈ ದೇಶದ ಸ್ವಾತಂತ್ರ್ಯಕ್ಕೆ ಏನು ಅರ್ಥ ಇದೆ? ಆದ್ದರಿಂದ ಈ ಸುಲಿಗೆ ರಾಷ್ಟ್ರದ ಸ್ವಾತಂತ್ರ್ಯ ದಲಿ

(ಕೊನೇ ಪುಟ ನೋಡಿ)

# ಅತ್ಯಾಚಾರಕ್ಕೊಳಗಾದ ನಾಗಮ್ಮನಿಗೆ ನ್ಯಾಯ ಸಿಕ್ಕೀತೆ?

(1ನೇ ಪುಟದಿಂದ)

ಅಂದು ಪತಿಯೊಡನೆ ಸೌದೆ ತರಲು ಹತ್ತಿರದ ಕನ್ನಂಪಳ್ಳಿ ಬೆಟ್ಟಕ್ಕೆ ಹೋಗಿದ್ದಳು. ಅಂದೇ ಅದೇ ಬೆಟ್ಟದ ಆಂಜನೇಯಸ್ವಾಮಿ ದೇವಸ್ಥಾನದಲ್ಲಿ ಮದುವೆಯೊಂದಿತ್ತು. ಮದುವೆಗಾಗಿ ಬಂದಿದ್ದ ಚಿಂತಾಮಣಿಯ ಒಂಬತ್ತು ಮಂದಿ ಪುಂಡಯುವಕರು ನಾರಾಯಣಸ್ವಾಮಿ ಮತ್ತು ನಾಗಮ್ಮ ಇಬ್ಬರೇ ಇರುವುದನ್ನು ಕಂಡು ನೀವಿಬ್ಬರು ಗಂಡ-ಹೆಂಡಿರಲ್ಲ ಎಂದು ಗದರಿಸಿ ಬೆದರಿಸಿದರು. ನಾರಾಯಣಸ್ವಾಮಿ ಅಂತಹ ದಷ್ಟಪುಷ್ಟಿಯಾದ ಅಥವಾ ಗಟ್ಟಿಮುಟ್ಟಿನ ಯುವಕನಲ್ಲ. ತೆಳ್ಳಗೆ ಕುಳ್ಳಗೆ ಇರುವ ಚೀಕಲು ಯುವಕ.

ಸೌದೆಕಟ್ಟಲು ತಂದಿದ್ದ ಹಗ್ಗವನ್ನು ಕಂಡ ಪುಂಡರು ನಾರಾಯಣಸ್ವಾಮಿಯನ್ನು ಮರವೊಂದಕ್ಕೆ ಕಟ್ಟಿದರು. ನಂತರ ನಾಗಮ್ಮನ ಮೇಲೆರಗಿ ಬಾಯನ್ನು ಭದ್ರವಾಗಿ ಮುಚ್ಚಿ ಪಕ್ಕದ ಬಂಡೆಯೊಂದರತ್ತ ಎತ್ತಿಕೊಂಡು ಹೋಗಿ ಅತ್ಯಾಚಾರ ಎಸಗಿದರು.

ನಾಗಮ್ಮ ಅತ್ಯಾಚಾರಕ್ಕೆ ಒಳಗಾಗಿ ಆಸ್ಪತ್ರೆ ಸೇರಿ ಎರಡು ದಿನಗಳಾದ ನಂತರ ಆಕೆಯನ್ನು ನೋಡಲು ಆಸ್ಪತ್ರೆಗೆ ಹೋದಾಗ ನೋವು-ನರಳಾಟದಲ್ಲೇ ಇದ್ದಳು. ಬಾಯಿಬಿಟ್ಟು ತನ್ನ ದುರಂತವನ್ನು ಹೇಳುವಷ್ಟು ಶಕ್ತಳಾಗಿರಲಿಲ್ಲವಾದರೂ ಮೆಲ್ಲನೆ ಹಾಸಿಗೆಯಲ್ಲೇ ಎದ್ದು ತಲೆ ತಗ್ಗಿಸಿ ಕುಳಿತಳು. ಆಕೆಯ ಮುಖವನ್ನು ಆವರಿಸಿದ್ದ ಭಯ ಮತ್ತು ಅವಮಾನದ ಛಾಯೆ ಪುರುಷವರ್ಗವನ್ನೇ ನಾಚಿಸುತಿತ್ತು.

ನಾಗಮ್ಮ ತನ್ನ ಗಂಡನಿಗೆ ಹೇಳಿರುವ ಘಟನೆ ಹೀಗಿದೆ: ಸುಮಾರು ನಾಲ್ಕೈದು ಯುವಕರು ನನ್ನ ಬಾಯಿಮುಚ್ಚಿ ಬಂಡೆಯತ್ತ ಹೊತ್ತುಕೊಂಡು ಹೋದರು. ಎಷ್ಟೇ ಚಡಪಡಿಸಿದರೂ, ಕೈಮುಗಿದು 'ಅಯ್ಯೋ ಬಿಡ್ರಣ್ಣ ಬಿಡ್ರಣ' ಎಂದು ಬೇಡಿದರೂ, ಕಣ್ಣೀರು ಸುರಿಸಿದರೂ ಬಿಡಲಿಲ್ಲ. ಧರಧರನೆ ಎಳೆದಾಡಿ ಬಂಡೆಯ ಮರೆಯಲ್ಲಿ ಮಲಗಿಸಿದರು. ಸುತ್ತಲೂ ರಣಹದ್ದುಗಳಂತೆ ನನ್ನ ಮೇಲೆರಗಿದ್ದ ಅವರು ಸೀರೆ, ರವಿಕೆ ಹರಿದಾಕಿದರು. ಇಬ್ಬರು ಅತ್ಯಾಚಾರ ಎಸಗಿದರು, ಅಷ್ಟರಲ್ಲಿ ನನಗೆ ಪ್ರಜ್ಞೆ ತಪ್ಪಿಹೋಗಿತ್ತು. ಆಮೇಲೆ ಏನಾಯಿತೋ ನನಗೆ ಗೊತ್ತಿಲ್ಲ. ಎಚ್ಚರ ಬಂದಾಗ ನಾನು ಮೇಲೇಳುವ ಸ್ಥಿತಿಯಲ್ಲೂ ಇರದ ಹಾಗೆ ನನ್ನ ಮೈಕೈಯಲ್ಲ ನೋವಾಗಿದ್ದವು.

ನಾರಾಯಣಸ್ವಾಮಿ ಹೇಳುತ್ತಾನೆ: ಇಷ್ಟರಲ್ಲಿ ಒಂಬತ್ತು ಮಂದಿಯಲ್ಲೊಬ್ಬ ನನಗೆ ಏನೂ ಮಾಡುವುದಿಲ್ಲವೆಂದು ಭರವಸೆಕೊಡುವುದಾದರೆ ನಿನ್ನ ಕೈಕಾಲು ಬಿಚ್ಚುತ್ತೇನೆಂದು ಮುಂದೆ ಬಂದಿದ್ದ. ಅಂತಹ ಸಹಕಾರಕ್ಕಾಗಿ ಕಾದಿದ್ದ ನಾನು ಏನೂ ಮಾಡುವುದಿಲ್ಲವೆಂದು ಒಪ್ಪಿಕೊಂಡೆ. ಆತ ಮರಕ್ಕೆ ಮತ್ತು ಕಾಲುಗಳಿಗೆ ಕಟ್ಟಿದ್ದ ಹಗ್ಗವನ್ನು ಬಿಚ್ಚಿ ಓಡಿಹೋದ. ಆಗ ಎಲ್ಲ ಪುಂಡರು ಸೀಟಿ-ಕೇಕೆ ಹಾಕುತ್ತ ಬೆಟ್ಟ ಇಳಿದು ಓಡುತ್ತಿದ್ದರು. ನಾನು ನನ್ನ ಹೆಂಡತಿ ಇದ್ದ ಜಾಗ ಪತ್ತೆಹಚ್ಚಿದೆ ಸುಸ್ತಾಗಿ ಅರೆ ಪ್ರಜ್ಞಾವಸ್ಥೆಯಲ್ಲಿದ್ದ ಆಕೆಯನ್ನು ಬಹು ಪ್ರಯಾಸದಿಂದ ಮನೆಗೆ ಕರೆತಂದೆ. ಮನೆಮಂದಿಗೆಲ್ಲ ನಡೆದ ಘಟನೆ ತಿಳಿಸಿದೆ. ಪೊಲೀಸ್ ಕಂಪ್ಲೇಂಟ್ ಕೊಡಲು ಮತ್ತು ನನ್ನ ಹೆಂಡತಿಯನ್ನು ಆಸ್ಪತ್ರೆಗೆ ಸೇರಿಸಲು ಚಿಂತಾಮಣಿಗೆ ಬಂದೆವು. (ಚಿಂತಾಮಣಿಗೂ ನಲ್ಲಗುಟ್ಟಹಳ್ಳಿಗೂ ಸುಮಾರು ಒಂದೂವರೆ ಮೈಲಿ ದೂರ.)

ಆಸ್ಪತ್ರೆಗೆ ಬಂದಾಗ ಡಾ॥ ಸಾವಿತ್ರಮ್ಮ ಸುಮ್ಮನೆ ನೋಡಿ ಏನೂ ಆಗಿಲ್ಲ ಹೋಗು ಎಂದು ಕಳುಹಿಸಿಬಿಟ್ಟಳು. ಅಂದು ರಾತ್ರಿ ಸಾವಿತ್ರಮ್ಮನ ಮನೆಯಲ್ಲಿ ನಾಮಕರಣ ಸಮಾರಂಭವಿತ್ತು. ಏನೂ ತೋಚದೆ ಅನಿವಾರ್ಯವಾಗಿ ಮತ್ತೆ ಊರಿಗೆ ಹೋಗಬೇಕಾಯಿತು. ಅಷ್ಟರಲ್ಲಿ ಪೊಲೀಸ್‌ಗೆ ಕಂಪ್ಲೇಂಟ್ ಕೊಟ್ಟಾಯಿತು. ಅಂದು ರಾತ್ರಿ ನಾಗಮ್ಮನಿಗೆ ನಿದ್ರೆಬರಲಿಲ್ಲ. ವಿಪರೀತ ಚಳಿ-ಜ್ವರ ನೋವಿನಿಂದ ನರಳುತ್ತಿದ್ದಳು. ಆಕೆಯ ಆರ್ತನಾದ ಕೇಳಲಾಗದೆ ರಾತ್ರೋರಾತ್ರಿ ಮತ್ತೆ ಚಿಂತಾಮಣಿಗೆ ಬಂದು ದಲಿತ ಸಂಘರ್ಷ ಸಮಿತಿಯ ಕಾರ್ಯಕರ್ತ ಶಿವಣ್ಣ ಅವರನ್ನು ಕಂಡು ನಡೆದ ವಿಷಯ ತಿಳಿಸಿ, ನಾಗಮ್ಮನ ಸ್ಥಿತಿಯನ್ನು ಹೇಳಲಾಯಿತು. ತತ್‌ಕ್ಷಣ ಅವರು ಡಾ॥ ಸಾವಿತ್ರಮ್ಮನ ಬಳಿ ಬಂದು ವಿಚಾರಿಸಿದರು. ಆಗ ಸಾವಿತ್ರಮ್ಮ 'ನನ್ನಿಷ್ಟ ಅಡ್ಮಿಟ್ ಮಾಡ್ಕೊಳ್ತೀನಿ ಬಿಡ್ತೀನಿ ನೀವ್ಯಾರು ಕೇಳೋಕೆ' ಎಂದು ಕೊನೆಗೆ ಬೆಳಿಗ್ಗೆ ನಾಗಮ್ಮನನ್ನು ಕರೆತರಲು ಹೇಳಿ ಅಡ್ಮಿಟ್ ಮಾಡಿಕೊಂಡಳು ಎಂದು ನಾರಾಯಣಸ್ವಾಮಿ ಹೇಳುತ್ತಾನೆ.

(ಕೊನೇ ಪುಟ ನೋಡಿ)



ನಾಗಮ್ಮ ಮೇಲಿನ ಅತ್ಯಾಚಾರ ಖಂಡಿಸಿ ದಲಿತ ಸಂಘರ್ಷ ಸಮಿತಿ ಪ್ರತಿಭಟನಾ ಪ್ರದರ್ಶನ ನಡೆಸಿತು.

# ಡಿಯಸೆಸ್ಸ್ ಹೋರಾಟದಿಂದ ದಲಿತರಿಗೆ ದಕ್ಕಿದ ಭೂಮಿ

● ಆರೆಸ್. ದೊಡ್ಡಣ್ಣ

ದಲಿತ ಸಂಘರ್ಷ ಸಮಿತಿ ಪಿರಿಯಾಪಟ್ಟಣ ತಾಲ್ಲೂಕು ಶಾಖೆಯು ನಡೆಸಿದ ನಿರಂತರ ಹೋರಾಟದಿಂದಾಗಿ ಆ ತಾಲ್ಲೂಕಿನ ಇಪ್ಪತ್ತುಮಂದಿ ದಲಿತರಿಗೆ ತಲಾ ನಾಲ್ಕು ಎಕರೆ ಜಮೀನು ಇತ್ತೀಚೆಗೆ ದೊರೆಯಿತು.

ದೊಡ್ಡಹರವೆ ಗ್ರಾಮದಲ್ಲಿ ಸುಮಾರು ಒಂದು ಸಾವಿರ ಎಕರೆ ಭೂಮಿಯನ್ನು ಜಂಟಿ ಬೇಸಾಯ ಸೇವಾ ಸಹಕಾರ ಸಂಘ ಸರ್ಕಾರದಿಂದ ಪಡೆದಿತ್ತು. ಸರಕಾರವು 200ಮಂದಿ ನಿರ್ಗತಿಕರನ್ನು ಪೇರುದಾರರನ್ನಾಗಿ ಮಾಡಿಸಿ ತಲಾ ನಾಲ್ಕು ಎಕರೆಯಂತೆ ಜಮೀನು ಮಂಜೂರು ಮಾಡಿ-ಉಳಿದ 200 ಎಕರೆಯನ್ನು ಸಹಕಾರ ಸಂಘದ ಅಭಿವೃದ್ಧಿಗೆ ಬಿಟ್ಟುಕೊಟ್ಟಿತು.

ಆದರೆ ಸಹಕಾರ ಸಂಘದ ಭ್ರಷ್ಟ ಆಡಳಿತವರ್ಗ 40ಎಕರೆಯನ್ನು ಟಿಬೆಟ್ಟಿಯನ್ನರಿಗೆ ಗುತ್ತಿಗೆ ನೀಡಿ ಬಂದ ಆದಾಯವನ್ನು ನುಂಗಿ ನೀರುಕುಡಿಯುತ್ತಿತ್ತು.

ಇನ್ನೂರು ಮಂದಿ ಪೇರುದಾರರಲ್ಲಿ ಕೆಲವರು ತೊಂದರೆಗಳಿಂದ ಜಮೀನು ಸಾಗುವಳಿ ಮಾಡದೆ ಬಿಟ್ಟಿದ್ದನ್ನು ಸಹಕಾರ ಸಂಘದ ಅಧ್ಯಕ್ಷರು ಮತ್ತಿತರರು ಕಬಳಿಸಲು ಹೊಂಚುಹಾಕುತ್ತಿದ್ದರು. ಈ ಹಗಲುದರೋಡೆ ಕಂಡ ದಲಿತ ಸಂಘರ್ಷ ಸಮಿತಿ ಕಳೆದ ಒಂದು ವರ್ಷಗಳಿಂದ ಸತತ ಹೋರಾಟ ಮಾಡಿ, ಈ ಬಗ್ಗೆ ತನಿಖೆಗೆ ಸರಕಾರವನ್ನು ಒತ್ತಾಯಿಸಿತ್ತು.

ಸಂಘರ್ಷ ಸಮಿತಿಯ ಮನವಿಯನ್ನು ಪುರಸ್ಕರಿಸಿ ಸರ್ಕಾರ ತನಿಖೆ ನಡೆಸಿದ ನಂತರ ಟಿಬೆಟ್ಟಿಯನ್ನರಿಗೆ ಸಹಕಾರ ಸಂಘ ಗುತ್ತಿಗೆ ನೀಡಿದ್ದ ಜಮೀನು ಪಡೆದು ಈಗ 20ಮಂದಿ ದಲಿತರಿಗೆ ತಲಾ ಎರಡು ಎಕರೆ ಜಮೀನನ್ನು ಹಂಚಿತು. ಜೀವನದಲ್ಲಿ ಹೊಸ ಬೆಳಕು ಕಂಡ ಈ ದಲಿತರು ಈಗ ಸಾಗುವಳಿಯಲ್ಲಿ ತೊಡಗಿದ್ದಾರೆ.

## ಬೈರಂಡಹಳ್ಳಿಯಲ್ಲಿ ದಲಿತರ, ಸವರ್ಣೀಯರ ನಡುವೆ ದ್ವೇಷದ ಹೊಗೆ

ಕೋಲಾರ ತಾಲ್ಲೂಕು ಬೈರಂಡಹಳ್ಳಿ ಗ್ರಾಮದ ಸವರ್ಣೀಯರ ಮತ್ತು ದಲಿತರ ನಡುವೆ ಕಳೆದ ಒಂದು ವರ್ಷದಿಂದ ಹೊಗೆಯಾಡುತ್ತಿರುವ ದ್ವೇಷದ ಕಿಡಿ ಯಾವಗಳಿಗೆಯಲ್ಲಾದರೂ ಹೊತ್ತಿಕೊಳ್ಳುವ ಗಂಭೀರ ಸ್ಥಿತಿ ಉಂಟಾಗಿದೆ.

1979ರ ಅಕ್ಟೋಬರ್‌ನಲ್ಲಿ ಊರಿನ ಕೆರೆಯ ತೆಪ್ಪೋತ್ಸವಕ್ಕೆ ಕೋಣನ ಬಲಿಕೊಡಲು ದಲಿತರು ನಿರಾಕರಿಸಿದ್ದೇ ದಲಿತರ ಮೇಲೆ ಸವರ್ಣೀಯರು ನಿರಂತರ ಹಲ್ಲೆ ನಡೆಸಲು ಕಾರಣವಾಯಿತು. ದಲಿತರ ಮಕ್ಕಳು ಕ್ಯಾಲನೂರು ಹಿರಿಯ ಪ್ರಾಥಮಿಕ ಶಾಲೆಗೆ ಹೋಗುವಾಗ ಮತ್ತು ದಲಿತ ಮಹಿಳೆಯರು ಹೊಲಗದ್ದೆಗಳಿಗೆ ಹೋಗುವಾಗ ಅವರನ್ನು ಅಡ್ಡಗಟ್ಟಿ ಸವರ್ಣೀಯರು ಅನೇಕ ಬಾರಿ ಹೊಡೆದು ಗಾಯಗೊಳಿಸಿ ಜೀವಕ್ಕೆ ಬೆದರಿಕೆ ಉಂಟುಮಾಡಿದ್ದಾರೆ.

ಇಷ್ಟೇ ಅಲ್ಲದೆ ದಲಿತರ ಮೇಲೆ ಸಾಮಾಜಿಕ ಬಹಿಷ್ಕಾರ ಬಹಳ ತಿಂಗಳಿಂದ ಮುಂದುವರಿದುಕೊಂಡು ಬಂದಿದೆ. ಈ ಬಗ್ಗೆ ಪೊಲೀಸ್ ಮತ್ತು ಸರ್ಕಾರಕ್ಕೆ ಅನೇಕಬಾರಿ ಮನವಿ ಸಲ್ಲಿಸಿದ್ದರೂ ತಮಗೆ ಯಾವ ರಕ್ಷಣೆಯೂ ಸಿಕ್ಕಿಲ್ಲವೆಂದು ಗ್ರಾಮದ ದಲಿತರು ಶಾಸಕರಿಗೆ ಕೊಟ್ಟಿರುವ ಮನವಿಯಲ್ಲಿ ತಿಳಿಸಿದ್ದಾರೆ.

## ರೈತರ ಮೇಲೆ ಗೋಲಿಬಾರಿಗೆ ಡಿಯಸೆಸ್ಸ್ ಖಂಡನೆ

ಉತ್ತರ ಕರ್ನಾಟಕದ ರೈತರ ಮೇಲೆ ಗುಂಡು ಹಾರಿಸಿ 18 ಜನರನ್ನು ಬಲಿತೆಗೆದುಕೊಂಡ ಪೊಲೀಸರ ಅಮಾನುಷ ಕೃತ್ಯವನ್ನು ಮತ್ತು ರೈತಾಪಿ ಜನರ ಬಗೆಗಿನ ಕಾಂಗ್ರೆ ಸರ್ಕಾರದ ಗೂಂಡಾ ನೀತಿಯನ್ನು ಕರ್ನಾಟಕ ದಲಿತ ಸಂಘರ್ಷ ಸಮಿತಿ ತೀವ್ರವಾಗಿ ಖಂಡಿಸಿದೆ.

ತೆರಿಗೆ ಸುಧಾರಣೆ, ಗೊಬ್ಬರದ ಬೆಲೆ ಇಳಿತ, ಅಭಿವೃದ್ಧಿ ತೆರಿಗೆ, ನೀರಿನ ಮೇಲಿನ ಕರ ವಿನಾಯಿತಿ ಮುಂತಾದ ಬೇಡಿಕೆಗಳಿಗಾಗಿ 33 ದಿನಗಳ ಸತ್ಯಾಗ್ರಹ ನಡೆಸಿ ನ್ಯಾಯಸಿಗದ ಕಾರಣ ಜುಲೈ 27ರಂದು ನರಗುಂದ ನವಲಗುಂದ ಮತ್ತು ಸೌಹತ್ತಿ ಬಂದ್ ಆಚರಿಸಿದ್ದು ಅಪರಾಧವೇ ಎಂದು ಪ್ರಶ್ನಿಸಿರುವ ದ. ಸಂ. ಸ. ರಾಜ್ಯ ಸಂಚಾಲಕ ಬಿ. ಕೃಷ್ಣಪ್ಪ ಅವರು ರೈತರು, ಕೂಲಿಗಾರರು ಮತ್ತು ದಲಿತರು ಬಸ್ಸುಗಳನ್ನು ಸುಡದೇ, ಆಫೀಸುಗಳನ್ನು ನುಗ್ಗದೆ ಸರ್ಕಾರ ಕಣ್ಣು ತೆರೆಯುವುದಿಲ್ಲ ಎನ್ನುವ ಮಟ್ಟಕ್ಕೆ ಈ ದೇಶದ ಪ್ರಜಾಪ್ರಭುತ್ವ ಹೋಗಿರುವುದು ದುರಂತ ಎಂದು ಹೇಳಿದ್ದಾರೆ.

ಪೊಲೀಸ್ ಮತ್ತು ಸೇನೆಗಳಿಂದ ನ್ಯಾಯ ಕೇಳುವ ಜನರನ್ನು ಕೊಲೆಮಾಡುವ ಈ ಸರ್ಕಾರ ಜನತೆಯ ಶತ್ರು. ಇಂಥ ಶ್ರೀಮಂತಶಾಹಿ-ಭೂಮಾಲೀಕ ಆಡಳಿತ ವ್ಯವಸ್ಥೆಯನ್ನು ಕಿತ್ತುಹಾಕದ ಹೊರತು, ದಲಿತರಿಗೆ, ಕೂಲಿಕಾರರಿಗೆ, ಶ್ರಮಜೀವಿಗಳಿಗೆ ನ್ಯಾಯ ಸಿಗದು ಎಂಬುದನ್ನು ಜನತೆ ಮನಗಾಣಬೇಕೆಂದು ಅವರು ಇತ್ತೀಚೆಗೆ ನೀಡಿದ ಪತ್ರಿಕಾ ಹೇಳಿಕೆಯಲ್ಲಿ ತಿಳಿಸಿದ್ದಾರೆ.

ರೈತರ ಮೇಲಿನ ಅಮಾನುಷ ಗೋಲಿಬಾರ್ ಬಗ್ಗೆ ನ್ಯಾಯಾಂಗ ತನಿಖೆ, ಮೃತರ ಕುಟುಂಬಗಳಿಗೆ ಪರಿಹಾರ ಮತ್ತು ರೈತರ ನ್ಯಾಯಬದ್ಧ ಬೇಡಿಕೆಗಳನ್ನು ಕೂಡಲೇ ಈಡೇರಿಸಬೇಕೆಂದು ದ. ಸಂ. ಸ. ಮತ್ತಿತರ ಪ್ರಗತಿಪರ ಸಂಘಟನೆಗಳು ಒತ್ತಾಯಿಸಿದ್ದವು. ಸರ್ಕಾರದ ಮೊಂಡುತನವನ್ನು ಪ್ರತಿಭಟಿಸಿ ಇದೇ ಬೇಡಿಕೆಗಳನ್ನು ಮುಂದಿಟ್ಟು ವಿಧಾನಸಭೆ ಮತ್ತು ವಿಧಾನ ಪರಿಷತ್‌ನಲ್ಲಿ ವಿರೋಧಿ ಸದಸ್ಯರು ಧರಣಿನಡೆಸಿದ್ದರಿಂದ ಮತ್ತು ರೈತಚಳುವಳಿಗೆ ತಲೆಬಾಗಿದ ಗುಂಡೂರಾವ್ ಗೋಲೀಬಾರ್ ಬಗ್ಗೆ ನ್ಯಾಯಾಂಗ ತನಿಖೆ ಮತ್ತು ರೈತರ ಬೇಡಿಕೆ ಈಡೇರಿಸುವ ಕೆಲವು ಕಣ್ಣೊರೆಸುವ ತಾತ್ಕಾಲಿಕ ಪರಿಹಾರ ನೀಡಿದ್ದಾರೆ.

# ಬಾಗಪತ್ : ಗುಂಡಿಗೆ ಮೂವರ ಬಲಿ, ಅ

ಜೂನ್ 18

ಬಾಗಪತ್‌ನಲ್ಲಿ ಕರಾಳ ದಿನ.

ಮೂವರ ಕೊಲೆ, ಸಾರ್ವಜನಿಕ ಚೌಕದಲ್ಲಿ ಮಹಿಳೆಯೊಬ್ಬಳನ್ನು ಬೆತ್ತಲೆ ಮಾಡಿ ಮೆರವಣಿಗೆ- ಪೊಲೀಸ್‌ಠಾಣೆಗೆ.

ಈ ಚಿಕ್ಕ ಪಟ್ಟಣದ ಜನ ಹಿಂದೆ ಎಂದೂ ಕಂಡಿರಲಿಲ್ಲ ಇಂಥ ಘಟನೆ.

ಜನರ ದೊಡ್ಡ ಗುಂಪು ಇದನ್ನೆಲ್ಲಾ ಮೂಕವಾಗಿ ನೋಡುತ್ತಿತ್ತು. ತೀವ್ರವಾಗಿ ಹೆದರಿತ್ತು.

ಈ ಪುಟ್ಟ ಪಟ್ಟಣದ ಸುತ್ತ ಡಕಾಯಿತರ ಚಟುವಟಿಕೆ ಇದೆ ಎಂದು ಪೊಲೀಸರ ಅಭಿಪ್ರಾಯ. ಎಂತಲೇ ಸುಮಾರು ಎರಡು ತಿಂಗಳಿಂದ ಇಲ್ಲಿನ ಜನರಿಗೆ ಪೊಲೀಸರೆಂದರೆ ನಡುಕ. ಎದುರು ಮಾತಾಡಿದರೆ ಏಟು, ಒದೆತ ಹೆದರಿಕೆ.

ಇಲ್ಲಿನ ಪೊಲೀಸ್ ಠಾಣೆಯ ಸ್ಟೇಷನ್ ಹೌಸ್ ಆಫೀಸರ್ ಮತ್ತು ಇನ್ಸ್‌ಪೆಕ್ಟರ್‌ಗಳೆಂದರೆ ಯಮದೂತರಿಗಿಂತ ಹೆಚ್ಚಿಂದೇ ಭಾವನೆ. ಈ ಅಧಿಕಾರಿಗಳಿಗೆ ರಾಜಕಾರಣಿಗಳ ಬೆಂಬಲವೂ ಇದೆಯೆಂಬುದು ಜನರ ಅನಿಸಿಕೆ. ಅದೇನೂ ಸುಳ್ಳಿರಲಾರದು.

ಇದೇನೂ ಜಾತಿ ಸಂಘರ್ಷಣೆ ಅಲ್ಲ, ಎನ್ನುತ್ತಾರೆ ಇಲ್ಲಿನ ಲೋಕದಳ ಮತ್ತು ಕಾಂಗ್ರೆಸ್-(ಐ) ರಾಜಕಾರಣಿಗಳು. ಸಂಕುಚಿತ ರಾಜಕೀಯವೂ ಇಲ್ಲ. ಗುಂಡೇಟಿನಿಂದ ಸತ್ತವರು, ಅಪಮಾನ ಮಾಡಿಸಿಕೊಂಡ ಮಹಿಳೆ ಡಕಾಯಿತ ಗುಂಪಿಗೆ ಸೇರಿದವಳು ಎಂಬುದು ಪೊಲೀಸರ ಅಪಾದನೆ.

ಬಾಗಪತ್ ಸಮೀಪದ ಹಳ್ಳಿಯ ರಾಮ್‌ಸಿಂಗ್ ತ್ಯಾಗಿ ವೃದ್ಧ. ಆತನ ಪ್ರಶ್ನೆ. "ಇಲ್ಲಿರುವ ಪೊಲೀಸರು ಅಮಾಯಕ ಜನರನ್ನು ರಕ್ಷಿಸುವುದಕ್ಕಾಗಿ ಇದ್ದಾರೋ ಅಥವಾ ಸ್ಥಳೀಯ ಗೂಂಡಾಗಳಿಗೆ ರಕ್ಷಕರಾಗಿದ್ದಾರೋ? ಕೆಲವು ಮಂದಿ ಬಾಗಪತ್‌ನ ಇಡೀ ಪೊಲೀಸ್ ಪಡೆಯ ಎದುರಿಗೇ ಮಹಿಳೆಯೊಬ್ಬಳನ್ನು ಅಪಮಾನಿಸುತ್ತಿದ್ದಾಗ ಪೊಲೀಸರು ಏನು ಮಾಡುತ್ತಿದ್ದರು?

ಈ ಮಹಿಳೆಯನ್ನು ಮೀರತ್ ಆಸ್ಪತ್ರೆಗೆ ಕರೆದುಕೊಂಡು ಹೋಗಲಾಯಿತಂತೆ, ಅಲ್ಲಿ ಆಕೆಯನ್ನು ಯಾರಾದರೂ ನೋಡಿ ಮಾತನಾಡಲು ಪ್ರಯತ್ನಿಸಿದರೆ ಅಂತಹವರನ್ನು ಗುಂಡಿಟ್ಟು ಕೊಲ್ಲುವುದಾಗಿ ಪೊಲೀಸ್ "ಠಾಣೆದಾರ" ಹೆದರಿಸಿದನಂತೆ.

ಬಾಗಪತ್ ಕತೆಯನ್ನು ಅಲ್ಲಿನ ಅನೇಕರು ಹೇಳುತ್ತಾರೆ.

ಜೂನ್ ದಿನಾಂಕ 18 ರಂದು ಮಧ್ಯಾಹ್ನದ ಸುಮಾರಿನಲ್ಲಿ ಬಾಗಪತ್ ಸಿಂಡಿಕೇಟ್ ಬ್ಯಾಂಕಿನ ಎದುರಿಗೆ ಟೈರ್ ರಿಪೇರಿ ಅಂಗಡಿ ಬಳಿ ಯು ಪಿ ಜಿ 6005 ನಂಬರಿನ ಬಿಳಿಯ ಅಂಬಾಸಿಡರ್ ಕಾರ್ ನಿಂತಿತ್ತು. ಅದರಲ್ಲಿ ಮೂವರು ಪುರುಷರು ಒಬ್ಬ ಮಹಿಳೆ ಮತ್ತು ಚಾಲಕ ಇದ್ದರು ಎನ್ನುತ್ತಾರೆ ಅನೇಕ ಮಂದಿ. ಕಾರಿನ ಟೈರು ರಿಪೇರಿ ಆಗಲೆಂದು ಅವರೆಲ್ಲ ಕಾದಿದ್ದರು. ಆ ಕೆಲಸ ಆಗುವವರೆಗೆ ಹತ್ತಿರದಲ್ಲೇ ಟೀ ಕುಡಿಯಲು ಗಂಡಸರೆಲ್ಲಾ ಹೋದರಂತೆ. ಹೆಂಗಸು ಮಾತ್ರ ಕಾರಿನೊಳಗೆ ಇದ್ದಳೆಂದು ನೋಡಿದ ಜನ ಹೇಳುತ್ತಾರೆ.

ಸಾಧಾರಣ ಬಟ್ಟೆ ಧರಿಸಿದ್ದವನೊಬ್ಬ ಕಾರಿನಲ್ಲಿ ಕುಳಿತಿದ್ದ ಮಹಿಳೆಯ ಬಳಿಗೆ ಬಂದು ಅನೇಕ ಅಸಭ್ಯ ಪ್ರಶ್ನೆಗಳನ್ನು ಕೇಳಿದ. ಆಕೆಯ ಗಂಡ
ಸೇರಿದಂತೆ ಟೀ ಕುಡಿಯಲು ಹೋಗಿದ್ದ ಕಾ
ಗಂಡಸರೆಲ್ಲಾ ಹಿಂತಿರುಗಿದರು ಅವರಿ
ಸಾಮಾನ್ಯ ಬಟ್ಟೆ ಧರಿಸಿದ್ದವನಿಗೂ ಮಾತು
ನಡೆದವು. ಮಹಿಳೆಯನ್ನು ಕಾಡಿಸಿದ್ದಕ್ಕಾಗಿ
ನನ್ನು ಅವರೆಲ್ಲರೂ ಹೊಡೆದರಂತೆ ಆತ
ಹೋದನಂತೆ. ಈ ದೃಶ್ಯವನ್ನೆಲ್ಲಾ ತಾವು ನೋ
ದುದಾಗಿ ವಕೀಲರೊಬ್ಬರು ಹೇಳುತ್ತಾರೆ.

○ ವಿ. ಆರ್. ಶ್ಯಾಂ

ಸಾಮಾನ ಬಟ್ಟೆ ಧರಿಸಿದ್ದವನು ಸ್ಥಳೀಯ ಸ
ಇನ್‌ಸ್ಪೆಕ್ಟರ್. ಸಾರ್ವಜನಿಕರೆದುರಿನಲ್ಲಿ ತ
ಏಟುಬಿದ್ದಿದ್ದಕ್ಕಾಗಿ ಆತನಿಗೆ ರೋಷಾವೇಶ ಬ
ರಬೇಕು. ಆತ ಅವಸರದಿಂದ ಠಾಣೆಗೆ ಹೋ
ಸ್ವಲ್ಪ ಹೊತ್ತಿನಲ್ಲೇ ವದಂತಿಗಳು ಹಬ್ಬಿದ
"ಕಾರಿನಲ್ಲಿ ಬಂದವರು ದರೋಡೆಕಾರ
ಬ್ಯಾಂಕ್ ಲೂಟಿ ಮಾಡಲು ಬಂದಿದ್ದಾರಂತೆ"
ಸಬ್ ಇನ್‌ಸ್ಪೆಕ್ಟರ್ ತನ್ನ ಸಿಬ್ಬಂದಿಯೊ
ಪೂರ್ಣ ಶಸ್ತ್ರಸಜ್ಜಿತನಾಗಿ ಬಂದ. ಬಂದೊ

# ಜಾತಿಗಳ ಹುಟ್ಟು ಮತ್ತು ಬೆಳ

ಮಾನವನ ನಾಗರೀಕತೆಯಲ್ಲಿ ಮುಖ್ಯ ಪಾತ್ರವಹಿಸುವ ಭೌತಿಕ ವಸ್ತುಗಳನ್ನು ಸಂಶೋಧಿಸಿ ವಿವರಿಸುವುದನ್ನು ನಾವು ನೋಡಿದ್ದೇವೆ ಆದರೆ ಮಾನವಕೃತ ಸಂಸ್ಥೆಯೊಂದರ ಸಂಶೋಧನೆಯನ್ನು ಕಾಣುವವರು ವಿರಳ. ಇಂಥ ಒಂದು ಸಂಸ್ಥೆಯನ್ನು ಬಹಿರಂಗಗೊಳಿಸುವುದೇ ಒಂದು ಬಗೆಯ ವಿಚಿತ್ರ. ಆದರೆ ಮನುಕುಲವಿಜ್ಞಾನದ ವಿದ್ಯಾರ್ಥಿಗಳಾದ ನಮಗೆ ಈ ಶೋಧನೆ ಪ್ರಯಾಸವನ್ನುಂಟುಮಾಡುವುದಿಲ್ಲವೆಂಬ ಭರವಸೆಯನಗಿದೆ. ಈ ವಿಚಾರ ಸಂಕಿರಣದಲ್ಲಿ ಭಾಗವಹಿಸಿದ ಗೆಳೆಯರು ಪ್ರಾಚೀನ ಮತ್ತು ಆಧುನಿಕ ಸಮಾಜದ ಅನೇಕ ಸಮಾಜದ ಅನೇಕ ಸಂಸ್ಥೆಗಳನ್ನು ಖಚಿತವಾಗಿ ವಿವರಿಸಿದ್ದಾರೆ. "ಭಾರತದಲ್ಲಿ ಜಾತಿಗಳು" ಎಂಬ ಪ್ರಬಂಧದಲ್ಲಿ ನಾನು ಜಾತಿಗಳ ಹುಟ್ಟು, ರಚನೆ, ಬೆಳವಣಿಗೆಯನ್ನು ಕುರಿತು ವಿವರಿಸಲಿದ್ದೇನೆ.

ನವನೀತ ಸಮರ್ಥರನೇಕರು ಜಾತಿಗಳ ನಿಗೂಢತೆಯನ್ನು ಪ್ರಕಟಪಡಿಸಲು ಪ್ರಯತ್ನಪಟ್ಟಿದ್ದಾರೆ, ಆದರೂ ಈ ಸಂಸ್ಥೆ ಇನ್ನೂ ವಿವರಿಸಲಾ
ಪ್ರಾಂತಕ್ಕೆ ಸೇರಿದೆ. ಪ್ರಾಯೋಗಿಕ ಮ
ಸೈದ್ಧಾಂತಿಕ ದೃಷ್ಟಿಯಿಂದ ಜಾತಿಯ ಸಮ
ವಿಶಾಲವಾದದ್ದು. ಇದೊಂದು ಸ್ಥಳೀಯ ಸಮ
ಇದರ ಪರಿಣಾಮಗಳು ಕಡೆಗಣಿಸುವಂಥವ
"ಭಾರತದಲ್ಲಿ ಜಾತಿಪದ್ಧತಿ ಇರುವವರೆ
ಹಿಂದೂಗಳು ಅಂತರಜಾತಿ ವಿವಾಹಗಳನ್ನು ಆ
ವುದಿಲ್ಲ ಮತ್ತು ಹೊರಗಿನವರೊಂದಿಗೆ ಸಾ
ಜಿಕ ಸಂಬಂಧಗಳನ್ನು ಬೆಳೆಸುವುದಿಲ್ಲ". ಹಿಂ
ಗಳು ಹೆಚ್ಚುಹೆಚ್ಚಾಗಿ ಪ್ರಪಂಚದ ಬೇರೆ
ಭಾಗಗಳಿಗೆ ವಲಸೆ ಹೋದದ್ದೇ ಆದರೆ ಜ
ಸಮಸ್ಯೆ ಅಂತರ ರಾಷ್ಟ್ರೀಯ ಸಮಸ್ಯೆ ಆಗುತ್ತ
ಭಾರತದ ಜನತೆ ಆರ್ಯ, ದ್ರಾವಿಡ, ಮಂಗೋ
ಲಿಯನ್ ಮತ್ತು ಸಿಥಿಯನ್ನರ ಮಿಶ್ರಣವಾಗಿ
ಶತಮಾನಗಳ ಹಿಂದೆ ಈ ಜನಾಂಗಗಳು ಪ್ರ
ಪಂಚದ ನಾನಾ ಪ್ರದೇಶ ಮತ್ತು ಸಂಸ್ಕೃತಿಗಳ
ಇಲ್ಲಿಗೆ ಬಂದರು. ಇಲ್ಲಿನ ಮೂಲನಿವಾಸಿಗಳ

# ಹಿಳೆಯ ಬೆತ್ತಲೆ ಮೆರವಣಿಗೆ - ಅತ್ಯಾಚಾರ

ೋಲಿಬಾರ್ ಮಾಡಿಸಿದ. ಇಬ್ಬರಿಗೆ ಬೆನ್ನಿನ ೆಗೆ ಏಟು ಬಿತ್ತು. ಅವರು ಸತ್ತು ಬಿದ್ದರು. ನೊಬ್ಬ ೆಗೆ ತೆವಳುತ್ತಿದ್ದ, ಎದ್ದು ನಿಲ್ಲು ಂತೆ ಆತನಿಗೆ ಆಜ್ಞೆ ಮಾಡಲಾಯಿತು. ಅವನು ತೊಡನೆ ಗುಂಡೇಟು ಬಿತ್ತು. ಅವನು ಸತ್ತು ಸಿದ ಎನ್ನುತ್ತಾರೆ ಪ್ರತ್ಯಕ್ಷದರ್ಶಿಯೊಬ್ಬರು.

ೇಟೆಯಲ್ಲಿ ಸಿಕ್ಕಿರಿದ ಜನಸಂದಣಿ ಇದನ್ನೆಲ್ಲಾ ೋಡುತ್ತಿತ್ತು. ಪೊಲೀಸರಿಗೆ ಅಡ್ಡಿ ಬರಲು, ಅವನ್ನು ಪ್ರಶ್ನಿಸಲು ಯಾರಿಗೂ ಧೈರ್ಯವಿಲ್ಲ. ಹಾಗೆ ಾಡಿದರೆ ತಾವು ಸತ್ತಂತೆಯೇ ಸರಿ. ಇಲ್ಲವೆ ತ್ರಹಿಂಸೆಯೇ ಗತಿ ಎಂದು ಅಲ್ಲಿನವನೊಬ್ಬ ೇಳುತ್ತಾನೆ

ಘಟನೆ ನಡೆದ ಸ್ಥಳಕ್ಕೂ ನ್ಯಾಯಾಲಯಕ್ಕೂ ಾರು ಗಜ ಕೂಡ ದೂರವಿಲ್ಲ. ನ್ಯಾಯಾಲಯ ಳಿ ಇದ್ದ ವಕೀಲರೊಬ್ಬರು ಹೇಳುತ್ತಾರೆ: ನಾನು ನ್ಯಾಯಾಲಯದ ಬಳಿ ಇದ್ದಾಗ ಪೊಲೀ ನೊಬ್ಬ ಅತ್ತ ಓಡೋಡಿ ಬಂದ. ಅವನು ಡಕಾ ಯಿತರು ಬಂದಿದ್ದಾರೆ ಎಂದು ಕೂಗಿಕೊಂಡ, ಅನೇಕ ಜನರು ಓಡಿದರು ನಾನು ಅತ್ತ ಓಡಿದೆ. ಪೊಲೀಸರು ಹಿಂದೆಯೇ ಇದ್ದರು. ನಾವೆಲ್ಲಾ ಸ್ಥಳಕ್ಕೆ ತಲುಪಿದ ಕೂಡಲೇ ಪೊಲೀಸರು ಗುಂಡು ಹಾರಿಸಿದರು. ನಮ್ಮೆದುರಿಗೆ, ಮೂರು ಮಂದಿ ಸತ್ತು ಬಿದ್ದರು, ಇಬ್ಬರು ಕಾರಿನ ಬಳಿ ಇನ್ನೊಬ್ಬ ಸುಮಾರು 15–20 ಗಜಗಳಷ್ಟು ದೂರದಲ್ಲಿ, ಅನಂತರ ಕಾರಿನಲ್ಲಿದ್ದ ಮಹಿಳೆಯನ್ನು ಹೊರಕ್ಕೆಳೆದು ಲಾಠಿಗಳಿಂದ ಹೊಡೆಯಲಾಯಿತು. ಯಾರೂ ಆಕೆಯ ಸಹಾಯಕ್ಕೆ ಹೋಗಲಿಲ್ಲ, ಅನಂತರ ಆಕೆಯನ್ನು ಬೆತ್ತಲೆ ಮಾಡಲಾಯಿತು. ಅವಳ ಬಟ್ಟೆಗಳು ರಸ್ತೆಯಲ್ಲಿ ಬಿದ್ದಿದ್ದವು. ಆಕೆ ನಾಚಿಕೆ ಅವಮಾನಗಳಿಂದ ಕುಳಿತುಕೊಳ್ಳಲು ಯತ್ನಿಸಿದ್ದಳು. ಆದರೆ ಪೊಲೀಸರು ಲಾಠಿ ಬೀಸಿ ಆಕೆಯನ್ನು ಎದ್ದು ನಿಲ್ಲುವಂತೆ ಮಾಡಿದರು. ಜನರ ಗುಂಪಿನಲ್ಲಿದ್ದವರೊಬ್ಬರು ಆಕೆಯ ಕಡೆಗೆ ಲುಂಗಿಯನ್ನು ಎಸೆದರು. ಅದನ್ನು ಆಕೆ ಉಡಲು ಪೊಲೀಸರು ಅವಕಾಶ ಕೊಡಲಿಲ್ಲ. ಬೆತ್ತಲೆಯಾಗಿಯೇ ಆಕೆಯನ್ನು ಪೇಟೆಯಲ್ಲಿ ನಡೆಸಿಕೊಂಡು ಹೋಗಲಾಯಿತು–ಪೊಲೀಸ್ ಠಾಣೆಗೆ.

ಠಾಣೆಯ ಎದುರಿಗೆ ದೊಡ್ಡ ಗುಂಪು ಸೇರಿತ್ತು–ಆದರೆ ಅವರನ್ನೆಲ್ಲಾ ರಿವಾಲ್ವರ್, ರೈಫಲ್‌ಗಳನ್ನು ಹಿಡಿದ ಪೊಲಿಸರು ದೂರನಿಲ್ಲಿಸಿದ್ದರು,

ಈ ಮಹಿಳೆಯನ್ನು ಮಾಯಾತ್ಯಾಗಿ ಎಂದು ಗುರುತಿಸಲಾಯಿತು. ಕೆಲವು ಘಂಟೆಗಳ ನಂತರ ಆಕೆ ಠಾಣೆಯ ಅಂಗಳದಲ್ಲಿ ಬೆತ್ತಲೆಯಾಗಿ ಬಿದ್ದಿದ್ದಳು, ಮೈಮೇಲೆಲ್ಲಾ ರಕ್ತ ಒಸರುತ್ತಿತ್ತು–ರಾತ್ರಿಯಾದ ನಂತರ ಆಕೆಯನ್ನು ವಿರತ್ ಆಸ್ಪತ್ರೆಗೆ ಸೇರಿಸಲಾಯಿತು,

ಇದಿಷ್ಟು ಸಂಗತಿಯನ್ನು 'ಸುಳ್ಳು' ಎನ್ನುವವರು ಇರಲಾರರು.

ಪೊಲೀಸರ ಹೇಳಿಕೆಯ ಪ್ರಕಾರ ಮಾಯಾತ್ಯಾಗಿಯನ್ನು ಬೆತ್ತಲೆಮಾಡಿದವರು ಜನರೇ ಹೊರತು ಪೊಲೀಸರಲ್ಲ. ಜನರ ಗುಂಪನ್ನು ಚದುರಿಸಲು ಗೋಲಿಬಾರ್ ಮಾಡಲಾಯಿತು.

ಆದರೆ ಗೋಲಿಬಾರ್‌ನಲ್ಲಿ ಮಾಯಾತ್ಯಾಗಿಯ ಜೊತೆಯಲ್ಲಿದ್ದ ಮೂವರು ಗಂಡಸರು ಮಾತ್ರವೇ ಯಾಕೆ ಸತ್ತರು? ಬೇರೆ ಯಾರಿಗೂ ಗಾಯವೂ ಸಹ ಏಕೆ ಆಗಲಿಲ್ಲ ಎಂಬ ಪ್ರಶ್ನೆಗೆ ಪೊಲೀಸರ ಉತ್ತರವೇ ಇಲ್ಲ

## ಪ್ರಧಾನಿಗೆ ಮಾಯಾ ವಿವರಣೆ

ಸಂಸತ್ತಿನ ಮೂವರು ಮಹಿಳಾ ಸದಸ್ಯರು ಮಾಯಾತ್ಯಾಗಿಯನ್ನು ಕಂಡು ಮಾತನಾಡಿದರು, ಆಕೆಯನ್ನು ದೆಹಲಿಗೆ ಕರೆದುಕೊಂಡು ಬಂದು ಪ್ರಧಾನಿ ಇಂದಿರಾ ಗಾಂಧಿ ಅವರೊಡನೆ ಮಾತುಕತೆ ನಡೆಸಿದರು, ಅನಂತರ ಈ ಮೂವರೂ ಹೊರ ಬಂದರು.

ಮಾಯಾತ್ಯಾಗಿ ಒಬ್ಬಳೇ ಇಂದಿರಾಗಾಂಧಿಯವರಿಗೆ ತನ್ನ ಮೇಲೆ ನಡೆದ ದೌರ್ಜನ್ಯವನ್ನು ವಿವರಿಸಿದಳು.

"ನಾನು ನನ್ನ ಸೋದರನ ಮಗಳು ರಾಜ್‌ಬಾಲಾ ಮದುವೆಗೆ ದೆಹಲಿಯಿಂದ ಹೋಗುತ್ತಿದ್ದೆ. ನಮ್ಮ ಬಾಡಿಗೆ ಕಾರು ಪಂಕ್ಚರ್ ಆಗಿದ್ದರಿಂದ ಬಾಗ

(7ನೇ ಪುಟ ನೋಡಿ)

## ೆಗೆ

ವಿಶೇಷ ಲೇಖನ

ಗೆ ಹೋರಾಡುತ್ತಲೇ ಇವರು ಇಂಡಿಯಕ್ಕೆ ಲಿಟ್ಟರು. ನಿರಂತರ ಸಂಪರ್ಕ ಮತ್ತು ಪರಸ್ಪರ ಬಂಧಗಳ ಮೂಲಕ ತಮ್ಮ ಪೂರ್ವ ಸಂಸ್ಕೃತಿ ನ್ನು ಮರೆತು ಸಾಮಾನ್ಯ ಸಂಸ್ಕೃತಿಯೊಂದನ್ನು ಾಪಿಸಿಕೊಂಡರು, ಭಾರತದ ಉದ್ದಕ್ಕೂ ಕಂಡು ರುವ ಸಾಂಸ್ಕೃತಿಕ ಐಕ್ಯತೆಯೇ ಈ ಜನರನ್ನು ಕಸೂತ್ರತೆಗೆ ಒಳಪಡಿಸಿದೆ. ಈ ಏಕಸೂತ್ರತೆಯ

ೂಲ : ಬಿ. ಆರ್. ಅಂಬೇಡ್ಕರ್
ಂಗ್ರಹಾನುವಾದ : ಸಿದ್ಧಲಿಂಗಯ್ಯ

ರಣದಿಂದ ಜಾತಿ ಪದ್ಧತಿಯನ್ನು ವಿವರಿಸು ುದು ಕಷ್ಟವಾಗಿದೆ. ಜಾತಿ ಏಕಸೂತ್ರತೆಯ ಟಕವನ್ನು ರವಾನಿಸುವ ಸಂಸ್ಥೆ ಆಗಿರುವುದರಿಂದ ಾತಿಯ ಹುಟ್ಟುಬೆಳವಣಿಗೆ ಎಂದರೆ ಈ ರವಾ ಸುವ ಪ್ರತಿಕ್ರಿಯೆಯ ವಿವರಣೆಯೇ ಆಗಿದೆ. ನಿಷಿ ೃತೆ ಅಥವಾ ಸಗೋತ್ರ ವಿವಾಹ ಜಾತಿಯ ತಿರುಳು ಎಂಬುದು ಜಾತೀಯ ಲಕ್ಷಣಗಳನ್ನು ವಿಮರ್ಶಾತ್ಮವಾಗಿ ಅಧ್ಯಯನ ಮಾಡುವ ಎಂಥವನಿಗೂ ಹೊಳೆಯುತ್ತದೆ. ಅಮೇರಿಕದ ಬಿಳಿಯರು ಮತ್ತು ಕರಿಯ ಜನರ ಸಂಬಂಧಗಳನ್ನು ಇಂಡಿಯಾದಲ್ಲಿ ಅನ್ವಯ ಮಾಡುವುದು ಸಾಧ್ಯವಿಲ್ಲ. ಏಕೆಂದರೆ ಇಲ್ಲಿಯ ಪರಿಸ್ಥಿತಿಯೇ ಬೇರೆ. ಇಂಡಿಯಾದ ಜನತೆ ಏಕರೂಪತೆಯನ್ನು ಉಳ್ಳವರಾಗಿದ್ದಾರೆ. ಭಾರತದ ವಿವಿಧ ಜನಾಂಗಗಳು ವಿಭಿನ್ನ ಪ್ರದೇಶಗಳಲ್ಲಿ ವಾಸಿಸುತ್ತಿದ್ದು ಪರಸ್ಪರ ಸಮ್ಮಿಲನಗೊಂಡಿದ್ದಾರೆ. ಇದು ಏಕರೂಪತೆಯುಳ್ಳ ಜನಾಂಗದ ಮುಖ್ಯ ಲಕ್ಷಣ, ಏಕರೂಪತೆಯ ಗುಣವಿದ್ದರೂ ಜಾತಿಯ ಸಮುದಾಯವನ್ನು ನಿರ್ಧಿಷ್ಟ ಘಟಕಗಳಾಗಿ ಕೃತಕ ವಿಭಜನೆಗೆ ಒಳಪಡಿಸಿದೆ. ಸಗೋತ್ರವಿವಾಹ ಪದ್ಧತಿ ಮೂಲಕ ಒಂದು ಜಾತಿ ಇನ್ನೊಂದು ಜಾತಿಯೊಡನೆ

(7ನೇ ಪುಟ ನೋಡಿ)

# ಜಾತಿಗಳ ಹುಟ್ಟು ಮತ್ತು ಬೆಳವಣಿಗೆ

(ಮಧ್ಯದ ಪುಟದಿಂದ)

ಸಂಬಂಧ ಹೊಂದುವುದನ್ನು ನಿಷೇಧಿಸಲಾಗಿದೆ. ಆದ್ದರಿಂದ ಸಗೋತ್ರವಿವಾಹವು ಜಾತಿ ಪದ್ಧತಿಯ ವಿಶಿಷ್ಟವಾದ ಮತ್ತು ಮುಖ್ಯವಾದ ಲಕ್ಷಣವೆಂಬ ತೀರ್ಮಾನಕ್ಕೆ ಬರುವುದು ಅನಿವಾರ್ಯವಾಗಿದೆ. ಈ ಕಾರಣದಿಂದ ಸಗೋತ್ರವಿವಾಹವನ್ನು ಅಧ್ಯಯನ ಮಾಡುವುದು ಜಾತಿಯ ಹುಟ್ಟು ಮತ್ತು ರಚನೆಯನ್ನು ಕುರಿತ ಅಧ್ಯಯನವಾಗುತ್ತಿದೆ.

ಇಂಡಿಯಾದ ಸಮಾಜ ಯಾವುದೇ ಸಮಾಜಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಪ್ರಾಚೀನತೆಯ ಅವಶೇಷಗಳನ್ನು ಇನ್ನೂ ಉಳಿಸಿಕೊಂಡಿದೆ. ಇದರ ಧರ್ಮ ಆದಿವಾಸಿಗಳದಾಗಿದ್ದು ಪದ್ಧತಿಗಳು ಬುಡಕಟ್ಟುಗಳ ಮೂಲಕ್ಕೆ ಸಂಬಂಧಿಸಿವೆ ಕಾಲ ಮತ್ತು ನಾಗರೀಕತೆಯ ತೀವ್ರವಾದ ಬೆಳವಣಿಗೆ ಆಗಿದ್ದರೂ ಸಹಾ ಇವುಗಳನ್ನು ಪತ್ತೆಹಚ್ಚುವುದು ಸಾಧ್ಯವಿದೆ. ಭಾರತದ ಪ್ರಾಚೀನ ಪದ್ಧತಿಗಳಲ್ಲಿ ಅತ್ಯಂತ ಗಮನಾರ್ಹವಾದದ್ದು ಭಿನ್ನಗೋತ್ರವಿವಾಹ ಪದ್ಧತಿ. ಚರಿತ್ರೆಯ ಬೆಳವಣಿಗೆಯೊಡನೆ ಭಿನ್ನಗೋತ್ರ ವಿವಾಹ ಪದ್ಧತಿ. ತನ್ನ ಪ್ರಭಾವವನ್ನು ಕಳೆದುಕೊಂಡಿತು. ಹತ್ತಿರದ ರಕ್ತಸಂಬಂಧಿಗಳನ್ನು ಬಿಟ್ಟರೆ ಮದುವೆಯ ವಿಚಾರದಲ್ಲಿ ಹೀಗೇ ಎಂದು ಗೆರೆಎಳೆಯುವುದು ಅಪರೂಪ. ಆದರೆ ಇಂಡಿಯಾದ ಜನತೆಗೆ ಸಂಬಂಧಿಸಿದಂತೆ ಭಿನ್ನಗೋತ್ರ ವಿವಾಹ ಇಂದಿಗೂ ಕೂಡ ಕಟ್ಟಳೆಯಾಗಿದೆ. ಇಲ್ಲಿ ಕುಲಗಳಿಲ್ಲದಿದ್ದರೂ, ಕುಲ ಪದ್ಧತಿಯ ಲಕ್ಷಣಗಳಿವೆ ಇದನ್ನು ಭಿನ್ನಗೋತ್ರವಿವಾಹದ ನಿಯಮಕ್ಕೆ ಅನುಗುಣವಾಗಿ ನಡೆಯುವ ವಿವಾಹ ಪದ್ಧತಿಗಳಲ್ಲಿ ಕಾಣಬಹುದು. ರಕ್ತ ಸಂಬಂಧಿಗಳಲ್ಲಿ ಮದುವೆ ಆಗಬಾರದು ಎಂಬುದಷ್ಟೇ ಅಲ್ಲ ಒಂದೇ ಗೋತ್ರದವರು ಮದುವೆ ಆಗುವುದು ಅಪವಿತ್ರ ಎಂದು ಪರಿಗಣಿಸಲ್ಪಟ್ಟಿರುವುದು ಗಮನಾರ್ಹವಾಗಿದೆ

ಸಗೋತ್ರ ವಿವಾಹ ಪದ್ಧತಿಯು ಭಾರತಕ್ಕೆ ಪರಕೀಯವಾದದ್ದು ಇಲ್ಲಿಯ ಬಹುತೇಕ ಗೋತ್ರಗಳು ಮತ್ತು ಕುಲ ಸಂಸ್ಥೆಗಳು ಭಿನ್ನಗೋತ್ರ ವಿವಾಹಕ್ಕೆ ಮಾನ್ಯತೆ ಕೊಟ್ಟಿದ್ದವು. ಭಿನ್ನಗೋತ್ರ ವಿವಾಹ ಭಾರತಜನತೆಯ ಅಭಿಪ್ರಾಯವಾಗಿತ್ತು ಎಂದರೆ ಉತ್ಪ್ರೇಕ್ಷೆಯಾಗಲಾರದು. ಇದನ್ನು ಮೀರುವ ಧೈರ್ಯ ಯಾರಿಗೂ ಇರಲಿಲ್ಲ. ಸಗೋತ್ರವಿವಾಹ ಜಾತಿಗಳಲ್ಲಿ ಇದ್ದಾಗ್ಯೂ, ಭಿನ್ನಗೋತ್ರ ವಿವಾಹವನ್ನು ಕಟ್ಟುನಿಟ್ಟಾಗಿ ಆಚರಿಸಲಾಗುತ್ತಿತ್ತು. ಕಾಲಾನಂತರದಲ್ಲಿ ಸಗೋತ್ರ ವಿವಾಹ ಪದ್ಧತಿಯನ್ನು ಹೇರಿದ್ದರಿಂದ ಜಾತಿ ಪದ್ಧತಿ ಸೃಷ್ಟಿಯಾಯಿತು.

ಜಾತಿಯ ಸಮಸ್ಯೆ ಮದುವೆಯಾಗಬಹುದಾದ ಎರಡು ಭಿನ್ನ ಲಿಂಗಗಳ ಅಸಮಾನತೆಯ ಮೇಲೆ ನಿಂತಿದೆ. ದಂಪತಿಗಳಿಬ್ಬರು ಏಕಕಾಲದಲ್ಲಿ ಸತ್ತುಹೋದರೆ ಈ ಸಮಸ್ಯೆಯೇ ಹುಟ್ಟುವುದಿಲ್ಲ. ಆದರೆ ಇದು ಅಪರೂಪ. ಹೆಂಡತಿಗಿಂತ ಮೊದಲೇ ಗಂಡ ಸತ್ತರೆ ಆ ಜಾತಿಯಲ್ಲಿ ಅಧಿಕಮಹಿಳೆಯೊಬ್ಬಳನ್ನು ಕಾಣುತ್ತೇವೆ. ಆಕೆ ಮರುಮದುವೆಯಾಗುವುದರ ಮೂಲಕ ಸಗೋತ್ರವಿವಾಹವನ್ನು ಉಲ್ಲಂಘಿಸುತ್ತಾಳೆ. ಹಾಗೆಯೇ ಗಂಡನಿಗಿಂತ ಮೊದಲೇ ಹೆಂಡತಿ ಸತ್ತರೆ ಆ ಜಾತಿಯಲ್ಲಿ ಅಧಿಕ ಪುರುಷನೊಬ್ಬನು ಉತ್ಪತ್ತಿಯಾಗುತ್ತಾನೆ. ಈತ ಜಾತಿಯ ಹೊರಗೆ ಮದುವೆಯಾಗಿ ಸಗೋತ್ರವಿವಾಹವನ್ನು ಭಗ್ನಗೊಳಿಸಬಹುದು. ಹೀಗೆ ಅಧಿಕ ಪುರುಷ ಮತ್ತು ಮಹಿಳೆಯರು ಆ ಸಮಾಜ ಅವರ ಬಗ್ಗೆ ಎಚ್ಚರವಹಿಸದಿದ್ದಾಗ, ಸೂಕ್ತ ಸಂಗಾತಿಗಳು ದೊರೆಯದಿದ್ದಾಗ ಜಾತಿಯ ಹೊರಗೆ ಮದುವೆಯಾಗುವುದು ಅನಿವಾರ್ಯವಾಗುತ್ತದೆ. ಹೀಗಾಗಿ ಅವರು ಜಾತಿಪದ್ಧತಿಗೆ ಕುತ್ತಾಗಿ ಪರಿಣಮಿಸುತ್ತಾರೆ ಅಧಿಕ ಪುರುಷ ಮತ್ತು ಮಹಿಳೆಯರನ್ನು ಸಂಬಂಧಪಟ್ಟ ಜಾತಿಗೆ ನಿರುಪದ್ರವಿಯಾಗುವಂತೆ ನಿರ್ವಹಿಸಲು ವಿವಿಧ ಮಾರ್ಗಗಳನ್ನು ಅಳವಡಿಸಿಕೊಳ್ಳಲಾಗಿದೆ ಅಧಿಕ ಮಹಿಳೆಯಿಂದ ಒದಗಬಹುದಾದ ಅಪಾಯಗಳನ್ನು ದೂರಮಾಡಿ ಸಗೋತ್ರವಿವಾಹ ಪದ್ಧತಿಯನ್ನು ಕಾಪಾಡಿಕೊಳ್ಳಲು ಎರಡು ರೀತಿಯಿಂದ ಸಾಧ್ಯ.

1. ಮೃತ ಗಂಡನ ಜೊತೆಯಲ್ಲೇ ಆಕೆಯನ್ನು ಸುಡುವುದು, ಆದರೆ ಇದು ಲೈಂಗಿಕ ಅಸಮಾನತೆಯನ್ನೂ ನಿವಾರಿಸಲು ಸೂಕ್ತ ವಿಧಾನವಾಗಲಾರದು, ಅಲ್ಲದೆ ಈ ಕ್ರಮವನ್ನು ಎಲ್ಲಾ ವಿಧವೆಯರಿಗೂ ಅನ್ವಯಿಸಲಾಗುವುದಿಲ್ಲ, ಸಾವಿನಿಂದ ಪಾರಾದ ವಿಧವೆಯರು ಆ ಜಾತಿಗೆ ಎರಡು ರೀತಿಯ ಆತಂಕಗಳನ್ನು ತಂದೊಡ್ಡುತ್ತಾರೆ ಆಕೆ ಜಾತಿಯ ಹೊರಗೆ ಮದುವೆಯಾಗಿ ಸಗೋತ್ರ ವಿವಾಹ ಪದ್ಧತಿಯನ್ನು ಉಲ್ಲಂಘಿಸುತ್ತಾಳೆ ಇಲ್ಲವೆ ಜಾತಿಯ ಒಳಗೇ ಮದುವೆಯಾಗಿ ನವವಧುವೊಬ್ಬಳ ಮದುವೆಯ ಅವಕಾಶವನ್ನು ಕಸಿದುಕೊಳ್ಳುತ್ತಾಳೆ. ಈ ಬಗೆಯ ಅಪಾಯಗಳನ್ನು ನಿವಾರಿಸಲು ಇರುವ

2. ಎರಡನೇ ಕ್ರಮ ಆಕೆಗೆ ಶಾಶ್ವತ ವೈಧವ್ಯ ಪ್ರಾಪ್ತಿಮಾಡುವುದು. ಇದು ಆಕೆಯನ್ನು ಸುಡುವುದಕ್ಕಿಂತ ಹೆಚ್ಚು ಪ್ರಾಯೋಗಿಕವಾದದ್ದು. ಅವಳಿಗೆ ಮುಂದೆ ಯಾವುದೇ ಗಂಡಸಿನ ಹೆಂಡತಿಯಾಗುವುದಕ್ಕೆ ಅವಕಾಶವಿರುವುದಿಲ್ಲ.

(ಮುಂದುವರೆಯುವುದು)

# ಪ್ರಧಾನಿಗೆ ಮಾಯಾ ವಿವರಣೆ

(ಮಧ್ಯದ ಪುಟದಿಂದ)

ಪತ್‌ನಲ್ಲಿ ಅದರ ರಿಪೇರಿಗಾಗಿ ನಿಂತೆವು. ಕಾರಿನಲ್ಲಿ ನನ್ನ ಗಂಡನನ್ನು ಬಿಟ್ಟರೆ ಉಳಿದವರೆಲ್ಲಾ ನನಗೆ ಅಪರಿಚಿತರು.

"ಸ್ವಲ್ಪ ಹೊತ್ತಿನಲ್ಲೇ ಸಾಮಾನ್ಯ ಉಡುಪು ತೊಟ್ಟಿದ್ದವನು ನನ್ನ ಬಳಿಗೆ ಬಂದ. ಏನೇನೋ ಮಾತನಾಡಿದ. ನನ್ನ ಕೈಹಿಡಿದೆಳೆದ.

"ನನ್ನ ಗಂಡನಿಗೆ ಇದು ಸಹಿಸಲಿಲ್ಲ. ಅವರು ಅವನ ಕೆನ್ನೆಗೆ ನಾಲ್ಕಾರು ಏಟು ಬಿಗಿದರು. ಅವನು ಅಲ್ಲಿಂದ ಹೊರಟು ಹೋದ.

"ಮತ್ತೆ ಅವನು ಬಂದ ಪೊಲೀಸರ ಬಟ್ಟೆ ಹಾಕಿಕೊಂಡು. ಜೊತೆಯಲ್ಲಿ ಆಯುಧ ಧಾರಿಗಳಾದ ಪೊಲೀಸರೂ ಇದ್ದರು. ನನ್ನ ಗಂಡನನ್ನೂ ಇತರ ಇನ್ನಿಬ್ಬರನ್ನೂ ಅವರು ಗುಂಡಿಟ್ಟು ಕೊಂದರು.

"ಆಮೇಲೆ ಪೊಲೀಸರು ನನ್ನನ್ನು ಕಾರಿನಿಂದ ಹೊರಕ್ಕೆಳೆದರು. ನನ್ನ ಸೀರೆ-ಕುಬಸ ಹರಿದರು. ನಾನಾ ರೀತಿ ನನ್ನನ್ನು ಅಪಮಾನ ಮಾಡಿದರು. ಅದನ್ನೆಲ್ಲಾ ಹೇಳುವುದಕ್ಕೆ ನನಗೀಗ ಬಾಯಿಲ್ಲ.

"ನಾನು ಹೇಗಿದ್ದನೋ ಹಾಗೆಯೇ ನನ್ನನ್ನು ಪೊಲೀಸರು ಠಾಣೆಗೆ ಎಳೆದುಕೊಂಡು ಹೋದರು. ಠಾಣೆಯಲ್ಲಿ ನನ್ನ ಮಾನಾಪಹರಣ ಮಾಡಿದರು. ಅಲ್ಲಿ 9 ಜನ ಪೊಲೀಸರಿದ್ದರು. ಒಬ್ಬರ ನಂತರ ಒಬ್ಬರು-ಎಲ್ಲ 9 ಜನರೂ ನನ್ನ ಮೇಲೆ ಅತ್ಯಾಚಾರ ಮಾಡಿದರು. ನನ್ನ ಒಡವೆ ವಸ್ತುಗಳನ್ನೆಲ್ಲಾ ಕಿತ್ತುಕೊಂಡರು".

—ಮಾಯಾತ್ಯಾಗಿಯ ಈ ಮಾತುಗಳನ್ನೆಲ್ಲಾ ಕೇಳಿದ ಪ್ರಧಾನಿ "ಆಗಿದ್ದೇನೊ ಆಗಿಹೋಯಿತು ಈ ತತ್‌ಕ್ಷಣವೇ ನಾನು ಈ ವಿಷಯದ ಕಡೆಗೆ ಗಮನಕೊಡುತ್ತೇನೆ" ಎಂದು ಕಣ್ಣೊರೆಸಿ ಕಳುಹಿಸಿದರು.

# ಪೊಲೀಸರಿಂದ ದಲಿತ ಮಹಿಳೆಯ ಗರ್ಭಪಾತ; ತಾಯಿ ಅತ್ಯಾಚಾರಕ್ಕೆ ಮಗನಿಗೆ ಬಲಾತ್ಕಾರ

ಮಧ್ಯಪ್ರದೇಶದ ದುರ್ಗ್‌ನಲ್ಲಿ ದಲಿತವರ್ಗಕ್ಕೆ ಸೇರಿದ ಮೂರು ತಿಂಗಳ ಗರ್ಭಿಣಿಯನ್ನು ಪ್ರಶ್ನಿಸುವುದಕ್ಕಾಗಿ ಪೊಲೀಸ್ ಠಾಣೆಗೆ ಕರೆದುಕೊಂಡು ಹೋಗಿ ಮಹಿಳಾ ಕಾನ್‌ಸ್ಟೇಬಲ್‌ಗಳೇ ಆಕೆಯನ್ನು ಹೊಡೆದು, ಹಿಂಸಿಸಿ, ಗರ್ಭಪಾತ ಮಾಡಿದರೆಂಬ ಸಂಗತಿ ಬೆಳಕಿಗೆ ಬಂದಿದೆ. ಮಧ್ಯಪ್ರದೇಶದ ವಿಧಾನ ಸಭೆಯಲ್ಲಿ ಈ ವಿಷಯ ಪ್ರಸ್ತಾಪವಾದಾಗಲೇ ಮುಖ್ಯಮಂತ್ರಿ ಅರ್ಜುನ್ ಸಿಂಗ್ ಅವರೇ ಇದೊಂದು ಕ್ರೂರ ಕೃತ್ಯವೆಂದು ಹೇಳಿದರು.

ನಂದಿನಿ ಗಣಿಗಳಲ್ಲಿ ಕೆಲಸ ಮಾಡುತ್ತಿರುವ ಫೋರ್‌ಮನ್ ಒಬ್ಬರ ಮನೆಯಿಂದ ಆರು ಸಾವಿರ ರೂ. ಬೆಲೆ ಬಾಳುವ ಚಿನ್ನದ ಆಭರಣಗಳು ಕಾಣೆಯಾದ ಬಗ್ಗೆ ಪ್ರಶ್ನಿಸಲು ಈ ಮಹಿಳೆ ಪೂರ್ಣಿಮಾಳನ್ನು ಪೊಲೀಸ್ ಠಾಣೆಗೆ ಕರೆದುಕೊಂಡು ಹೋಗಲಾಯಿತು. ಮಹಿಳಾ ಸಬ್‌ಇನ್‌ಸ್ಪೆಕ್ಟರ್ ಒಬ್ಬರು ಮತ್ತು ಮಹಿಳಾ ಕಾನ್‌ಸ್ಟೇಬಲ್ ಇಬ್ಬರು ಆಕೆಯ ಮೇಲೆ ಕೈಮಾಡಿದರು. ಆಕೆಯ ಜೊತೆಗೆ ಬಂದಿದ್ದ ಆಕೆಯ ಮಗನನ್ನೂ ಆಕೆಯ ಗಂಡನನ್ನೂ ಥಳಿಸಲಾಯಿತು. ಬಡ ಪೂರ್ಣಿಮಾಳ ಗುಡಿಸಲಿಗೂ ಪೊಲೀಸರು ನುಗ್ಗಿ, ಹುಡುಕಾಡಿದರು. ಅಲ್ಲಿ ಯಾವುದೇ ಆಭರಣವೂ ಸಿಕ್ಕಲಿಲ್ಲ.

ಮೂರು ತಿಂಗಳು ಗರ್ಭಿಣಿಯಾಗಿದ್ದ ಪೂರ್ಣಿಮಾಳನ್ನು ಠಾಣೆಯಲ್ಲಿ ಬೆತ್ತಲೆಗೊಳಿಸಲಾಯಿತು. ಆಕೆಯ 14 ವರ್ಷದ ಮಗನನ್ನು "ನಿನ್ನ ತಾಯಿಯನ್ನು ಎಂದಾದರೂ ಬೆತ್ತಲೆಯಾಗಿ ನೋಡಿದ್ದೀಯಾ...? ಹ್ಞೂ ಸರಿ... ಮಗನೆ... ಆಕೆಯನ್ನು ಹಿಡಿದಪ್ಪಿ ಸಂಭೋಗಿಸು" ಎಂದು ಪೊಲೀಸರು ಆ ಬಾಲಕನನ್ನು ಮನಸಾರೆ ಥಳಿಸಿದರು.

## 'ಕರಾಳದಿನ' ಆಚರಣೆ

(1ನೇ ಪುಟದಿಂದ)

ತರ ಪಾಲಿಗಿಲ್ಲ. ಅದು ಶೋಷಕರದು. ಈ ಶೋಷಕರ ಸ್ವಾತಂತ್ರ್ಯವನ್ನು ಪ್ರತಿಭಟಿಸುವ ಸಲುವಾಗಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಆಗಸ್ಟ್ 15ರಂದು ಬೆಂಗಳೂರಿನಲ್ಲಿ 'ಸ್ವಾತಂತ್ರ್ಯ' ದಿನವನ್ನು ಕರಾಳ ದಿನವನ್ನಾಗಿ ಆಚರಿಸುವುದು. ಎಲ್ಲ ಜಿಲ್ಲೆ ಮತ್ತು ತಾಲ್ಲೂಕು ಶಾಖೆಗಳಿಂದ ಅಸಂಖ್ಯಾತ ಕಾರ್ಯಕರ್ತರು ಕರಾಳದಿನ ಆಚರಣೆ ಮೆರವಣಿಗೆಯಲ್ಲಿ ಭಾಗವಹಿಸುವರು.

## 'ಭಾಷಣ ಕೇಳೋ ಜನಗಳಿರಾ ನಾಗಮ್ಮನಿಗೆ ನ್ಯಾಯಕೇಳಿ'

ಸಾವಿತ್ರಮ್ಮನ ಅವಮಾನವೀಯ ವರ್ತನೆ, ನಿರ್ಲಕ್ಷತೆ ಮತ್ತು ನಾಗಮ್ಮನ ಮೇಲಿನ ಅತ್ಯಾಚಾರ ಖಂಡಿಸಿ ಮರುದಿನ ಚಿಂತಾಮಣಿಯ ಕಾಲೇಜು ವಿದ್ಯಾರ್ಥಿಗಳು ಮತ್ತು ಸುಮಾರು 800 ಮಂದಿ ಅನಕ್ಷರಸ್ಥ ದಲಿತ ಮಹಿಳೆಯರು ಪ್ರತ್ಯೇಕ ಪ್ರತಿಭಟನಾ ಮೆರವಣಿಗೆ ನಡೆಸಿ ಸಾವಿತ್ರಮ್ಮಳನ್ನು ಘೇರಾವ್ ಮಾಡಿದರು.

ಮತ್ತೆ ಒಂದೆರಡು ದಿನಬಿಟ್ಟು ದಲಿತ ಸಂಘರ್ಷ ಸಮಿತಿ ಭಾರಿ ಪ್ರತಿಭಟನಾ ಮೆರವಣಿಗೆ-ಸಭೆ ನಡೆಸಿತು. ಸಂಘರ್ಷ ಸಮಿತಿಯ ರಾಜ್ಯ ಸಂಚಾಲಕರಾದ ಬಿ. ಕೃಷ್ಣಪ್ಪ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಭೆಯಲ್ಲಿ ಅನೇಕ ಪ್ರಗತಿಪರರು ಮಾತನಾಡಿ ನಾಗಮ್ಮನ ಮೇಲಿನ ಅತ್ಯಾಚಾರ ಖಂಡಿಸಿ, ಪುಂಡ ಕಾಮುಕರ ಮೇಲಿನ ಕ್ರಮಕ್ಕೆ ಒತ್ತಾಯಿಸಿದರು. ಕೆಲ ತಿಂಗಳ ಹಿಂದೆತಾನೆ ಇಂತಹದೇ ಸಾಮೂಹಿಕ ಅತ್ಯಾಚಾರಕ್ಕೆ ಒಳಗಾಗಿದ್ದ ಹುಣಸೀಕೋಟೆಯ ಅನಸೂಯಮ್ಮ ಮೆರವಣಿಗೆಯ ಮುಖಂಡತ್ವ ವಹಿಸಿ ಸಭೆಯನ್ನುದ್ದೇಶಿಸಿ ಮಾತನಾಡುತ್ತ "ನಿನ್ನೆ ನಾನು, ಇಂದು ನಾಗಮ್ಮ ನಾಳೆ ನಿಮ್ಮ ಅಕ್ಕತಂಗಿಯರು ಎಂದು ಸಭಿಕರಿಗೆ ಹೇಳಿ ಭಾಷಣ ಕೇಳೋ ಜನಗಳಿರಾ ನಾಗಮ್ಮನಿಗೆ ನ್ಯಾಯ ಕೇಳಿ" ಎಂದು ಆಗ್ರಹಪಡಿಸಿದರು.

ಇತ್ತ ವಿಧಾನ ಮಂಡಲದಲ್ಲಿ ಚರ್ಚೆ-ಕೂಗಾಟ. ಅತ್ಯಾಚಾರ ನಡೆದಿರುವುದಾಗಿಯೇ ಕಂದಾಯ ಸಚಿವ ಬಂಗಾರಪ್ಪನವರು ಭಾಗಶಃ ಒಪ್ಪಿಕೊಂಡರು. ಶಾಸಕರ ತಂಡವೂ ಚಿಂತಾಮಣಿಗೆ ಹೋಗಿ ಪೊಲೀಸ್ ಮತ್ತು ವೈದ್ಯಕೀಯ ವರದಿ ಮೇಲೆಯೆ ತನ್ನ ವರದಿಯನ್ನು ಸಲ್ಲಿಸಿ ತೆಪ್ಪಗಾಗಿದೆ. ಅದರೀಗ ಪೊಲೀಸ್ ಮತ್ತು ವೈದ್ಯಕೀಯ ವರದಿಗಳಿಂದ ಅತ್ಯಾಚಾರಿಗಳಿಗೆ ಶಿಕ್ಷೆಯಾಗಿ ನಾಗಮ್ಮನಿಗೆ ನ್ಯಾಯ ಸಿಗುವ ಸೂಚನೆಗಳಿಲ್ಲ. ಕೊಲೆಗಡುಕರನ್ನು-ಅತ್ಯಾಚಾರಿಗಳನ್ನು ಸಮರ್ಥಿಸಿಕೊಳ್ಳುವ ಈ ಕರಾಳ ವ್ಯವಸ್ಥೆ ಇರುವವರೆಗೂ ಇನ್ನೂ ಎಷ್ಟೋ ನಾಗಮ್ಮಂದಿರು ಆಗುತ್ತಾರೋ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

## ತಗಡೂರು : ಭಾಗಶಃ ಜಯ

ಕಳೆದ ನಲವತ್ತು ವರ್ಷಗಳಿಂದ ನಿವೇಶನಗಳನ್ನು ಪಡೆಯಲು ಪ್ರಯತ್ನಿಸಿ ನಿರಾಶೆಗೊಂಡಿದ್ದ ನಂಜನಗೂಡು ತಾಲ್ಲೂಕು ತಗಡೂರು ಗ್ರಾಮದ ಜನರು ದಲಿತ ಸಂಘರ್ಷ ಸಮಿತಿಯ ನೇತೃತ್ವದಲ್ಲಿ ಮಳೆಗಾಳಿಬಿಸಿಲೆನ್ನದೆ ಒಂಬತ್ತು ತಿಂಗಳು ಧರಣಿ ನಡೆಸಿದ ಹೋರಾಟದಲ್ಲಿ ಭಾಗಶಃ ಜಯಗಳಿಸಿದ್ದಾರೆ.

ನಿವೇಶನ ಹಂಚಬಾರದೆಂದು ಭೂಮಾಲೀಕರು ಸರ್ಕಾರದ ವಿರುದ್ಧ ತಂದಿದ್ದ ತಡೆಯಾಜ್ಞೆಯನ್ನು ಹೈಕೋರ್ಟ್ ಎರಡು ಎಕರೆಗೆ ಹಿಂತೆಗೆದುಕೊಂಡಿರುವುದರಿಂದ, ಸಮಸ್ಯೆಗೆ ಅರ್ಧ ಪರಿಹಾರ ದೊರೆತಂತಾಗಿದೆ.

ಇದುವರೆಗೂ ಸಾಂಕೇತಿಕವಾಗಿ ನಡೆಸುತ್ತಿದ್ದ ಧರಣಿ ಸತ್ಯಾಗ್ರಹವನ್ನು ಜೂನ್ 27ರಂದು ಹಿಂತೆಗೆದುಕೊಳ್ಳಲಾಗಿದೆ. ಸತ್ಯಾಗ್ರಹದ ಫಲವಾಗಿ ನಿವೇಶನ ಕಾನೂನನ್ನು ಸರಳಗೊಳಿಸುವುದಾಗಿಯೂ ಸರ್ಕಾರ ಘೋಷಿಸಿದೆ.



ಈ ಪತ್ರಿಕೆಯು ರಾಮದೇವ ರಾಕೆಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3 ಇಲ್ಲಿ ಮುದ್ರಿಸಲ್ಪಟ್ಟು ಎಚ್. ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು. ವಿಳಾಸ : 5ಎ-ವಾಣಿ ವಾಣಿಜ್ಯಶಾಲಾ, ಪತ್ರಕರ್ತರ ಕಾಲೋನಿ, ಬೆಂಗಳೂರು-560002.